# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| | | |
|---|---|---|
| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ನವೆಂಬರ್ ೧೯, ೨೦೧೫ (ಕಾರ್ತಿಕ ೨೮, ಶಕ ವರ್ಷ ೧೯೩೭)<br>Bangalore, Thursday, November 19, 2015 (Karthika 28, Shaka Varsha 1937) | ಸಂಚಿಕೆ ೪೬<br>Issue 46 |


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ಸೇರ್ಪಡೆ ಆದೇಶ**

**ಸಂಖ್ಯೆ: ಸಇ 23 ಸಂಮಾಸ 2015 ಬೆಂಗಳೂರು, ದಿನಾಂಕ: 26–05–2015**

ಸಮಾಪನೆಗೊಂಡಿರುವ ದಿ ಮೈಸೂರು ಕಾಫಿ ಸಂಸ್ಕರಣ ಸಹಕಾರ ಸಂಘ ನಿ., ಮೈಸೂರು ಇದರ ಆವರಣದಲ್ಲಿ ಆಡಳಿತ ಕಛೇರಿ ಕಟ್ಟಡ ಹಾಗೂ ಸಹಕಾರ ಅಕಾಡೆಮಿ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಇ 23 ಸಂಮಾಸ 2015, ದಿನಾಂಕ: 08–04–2015 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

ಸದರಿ ಆದೇಶ ಭಾಗದ "..... ಸಹಕಾರ ಅಕಾಡೆಮಿ ಸ್ಥಾಪಿಸಲು, ಮತ್ತು ಆಡಳಿತ ಕಛೇರಿಯನ್ನು ನಿರ್ಮಿಸಲು ಸಂಘದಲ್ಲಿ ಲಭ್ಯವಿರುವ ನಿಶ್ಚಿತ ಠೇವಣಿಯನ್ನು ಉಪಯೋಗಿಸಿಕೊಂಡು ಒಟ್ಟು ರೂ. 2.48 ಕೋಟಿ ವೆಚ್ಚದಲ್ಲಿ, ಹಾಗೂ ಸಹಕಾರ ಅಕಾಡೆಮಿ ನಿರ್ಮಿಸಲು ರೂ. 4.75 ಕೋಟಿ ವೆಚ್ಚವನ್ನು ಸಂಘದ 5 ಎಕರೆ ಜಮೀನು ಮಾರಾಟದಿಂದ ಬಂದ ಹಣವನ್ನು ಉಪಯೋಗಿಸಿಕೊಂಡು ...." ಎಂಬುದನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಆದೇಶ ಭಾಗದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ, ಸಹಕಾರ ಇಲಾಖೆ.

**P.R. 462**
**SC-50**

### ತೋಟಗಾರಿಕೆ ಸಚಿವಾಲಯ

**ವಿಷಯ** : ಬಾಗಲಕೋಟೆ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದಲ್ಲಿ ನಿರ್ಮಿಸಿರುವ ಎರಡು ತೋಟಗಾರಿಕೆ ವಿಭಾಗದ ಕಟ್ಟಡ ನಿರ್ಮಾಣ ವೆಚ್ಚದ ಪರಿಷ್ಕೃತ ಮೊತ್ತಕ್ಕೆ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ** : ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರ ಪತ್ರ ಸಂ.ಕು.ಸ/ತೋ.ವಿ.ವಿ.ಬಾ/556/2014–15, ದಿನಾಂಕ: 27–06–2014.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಬಾಗಲಕೋಟೆ ಜಿಲ್ಲಾಡಳಿತದಿಂದ ನೀಡಲಾದ 300 ಎಕರೆ ಜಮೀನಿನಲ್ಲಿ ಶಿಕ್ಷಣ, ಸಂಶೋಧನೆ ಹಾಗೂ ವಿಸ್ತರಣಾ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದೆ. ಬಾಗಲಕೋಟೆಯ ತೋಟಗಾರಿಕೆ ಮಹಾವಿದ್ಯಾಲಯದ ತರಗತಿಗಳನ್ನು ತೋಟಗಾರಿಕೆ ಇಲಾಖೆಯಿಂದ ಹಸ್ತಾಂತರವಾದ ಹವೇಲಿ ಗ್ರಾಮದಲ್ಲಿನ ಹಳೇ ಕಟ್ಟಡಗಳಲ್ಲಿ ನಡೆಸುತ್ತಿದ್ದು, ಮುಂದಿನ ದಿನಗಳಲ್ಲಿ ಆಲಮಟ್ಟಿಯ ಅಣೆಕಟ್ಟೆಯ ಎತ್ತರವನ್ನು ಹೆಚ್ಚಿಸುತ್ತಿದ್ದ ಹಿನ್ನೆಲೆಯಲ್ಲಿ ಸದರಿ ಕಟ್ಟಡಗಳು ಮುಳುಗಡೆಯಾಗುವ ಸಾಧ್ಯತೆಯಿದ್ದು, ತಕ್ಷಣವೇ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಅತೀ ಅವಶ್ಯಕವಾದ್ದರಿಂದ ತೋ.ವಿ.ವಿ. ಬಾಗಲಕೋಟೆಯ ಮುಖ್ಯ ಆವರಣದಲ್ಲಿ ಎರಡು ತೋಟಗಾರಿಕಾ ವಿಭಾಗೀಯ ಕಟ್ಟಡಗಳನ್ನು ನಿರ್ಮಿಸಲು ಟೆಂಡರ್ ಕರೆದು ಕಡಿಮೆ ದರ ನಮೂದಿಸಿದ್ದ (ರೂ.4,99,73,249.00/–) ಮೆ:ಸ್ಟ್ಯಾಂಡರ್ಡ್ ಇನ್‌ಫ್ರಾಸ್ಟಕ್ಚರ್ ಇಂಡಿಯಾ ಪ್ರೈ.ಲಿ. ರವರಿಗೆ ವಹಿಸಿಕೊಡಲಾಯಿತು.

ಸದರಿ ಕಟ್ಟಡಗಳ ಕಾಮಗಾರಿ ಮುಕ್ತಾಯಗೊಂಡಿದ್ದು, 10 ತಿಂಗಳುಗಳಿಂದ ತೋಟಗಾರಿಕೆ ಮಹಾವಿದ್ಯಾಲಯದ ಉಪಯೋಗಕ್ಕಾಗಿ ಹಸ್ತಾಂತರಿಸಲಾಗಿದೆ. ಕಾಮಗಾರಿಯನ್ನು ವಾಸ್ತುಶಿಲ್ಪಿಗಳಿಂದ ಕೊಡಮಾಡಲಾದ ನಕ್ಷೆ ಹಾಗೂ ಅಂದಾಜು ಪತ್ರಿಕೆಯಂತೆ ನಿರ್ಮಿಸಲಾಗಿದ್ದು, ನಿರ್ಮಾಣ ಹಂತದಲ್ಲಿ ಕೆಲವೊಂದು ಅಂಶಗಳ ಪ್ರಮಾಣಗಳು ಟೆಂಡರ್‌ನಲ್ಲಿದ್ದ ಪ್ರಮಾಣಗಳಿಗಿಂತ ಹೆಚ್ಚಾಗಿ ಒಟ್ಟಾರೆ ಮೊತ್ತವು ರೂ. 5,76,92,877.00 ಗಳಾಗಿರುತ್ತದೆ(ರೂ.4,99,73,249.00+ರೂ.77,19,628/–). ಸದರಿ ಕಾಮಗಾರಿಯ ಪರಿಷ್ಕೃತ ಮೊತ್ತಕ್ಕೆ ದಿನಾಂಕ: 22–07–2013 ರಂದು ನಡೆದ 18ನೇ ವ್ಯವಸ್ಥಾಪನಾ ಮಂಡಳಿಯ ಸಭೆಯಲ್ಲಿ ಒಪ್ಪಿಗೆಯನ್ನು ನೀಡಲಾಗಿದೆ.

ಕಾಮಗಾರಿಯ ಪರಿಷ್ಕೃತ ಮೊತ್ತವು ರೂ.5,76,92,877.00 ಆಗಿದ್ದು, ಪಾವತಿಗೆ ಬಾಕಿ ಇರುತ್ತದೆ. ಪರಿಷ್ಕೃತ ಮೊತ್ತವು ರೂ.5.00 ಕೋಟಿ ಮೀರಿದ್ದು, ಸಚಿವ ಸಂಪುಟ ಅನುಮೋದನೆ ಪಡೆಯುವುದು ಅವಶ್ಯವಿರುವುದರಿಂದ ಸಚಿವ ಸಂಪುಟದ ಅನುಮೋದನೆಯನ್ನು ಕೋರಿ ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಆಇ 117 ವೆಚ್ಚ–4/2015, ದಿನಾಂಕ: 05–03–2015ರಲ್ಲಿ ಸಹಮತಿಯನ್ನು ನೀಡಿದೆ. ಈ ದಿಶೆಯಲ್ಲಿ ಮುಂದಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 527 ತೋಇವಿ 2014 ಬೆಂಗಳೂರು ದಿನಾಂಕ: 03–06–2015**

ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಬಾಗಲಕೋಟೆಯ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಮುಖ್ಯ ಆವರಣದಲ್ಲಿ ನಿರ್ಮಿಸಿದ ಎರಡು ತೋಟಗಾರಿಕೆ ವಿಭಾಗಗಳ ಕಟ್ಟಡ (ಬ್ಲಾಕ್–1 ಮತ್ತು 2) ಕಾಮಗಾರಿಯ ವೆಚ್ಚ (ರೂ.4,99,73,249.00+ರೂ.77,19,628) ಪರಿಷ್ಕೃತ ಮೊತ್ತ ರೂ. 5,76,92,877.00/–(ರೂ. ಐದು ಕೋಟಿ ಎಪ್ಪತ್ತಾರು ಲಕ್ಷದ ತೊಂಬತ್ತೆರಡು ಸಾವಿರದ ಎಂಟನೂರ ಎಪ್ಪತ್ತೇಳು ರೂಪಾಯಿ ಮಾತ್ರ)ಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜ್ಯೋತಿ ಆರ್.ಜೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ

P.R. 463

SC-20

## ಇಂಧನ ಸಚಿವಾಲಯ

**ವಿಷಯ** : 2015–16ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1. 2015–16ನೇ ಸಾಲಿನ ಆಯವ್ಯಯ.
2. ಕವಿನಿನಿ ಪತ್ರ ಸಂಖ್ಯೆ: ಎ1 ಎಫ್3 ಬಿ2 ದಿನಾಂಕ: 12–06–2015.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 18–06–2015.

**ಪ್ರಸ್ತಾವನೆ:**

1) ಮೇಲಿನ ಕ್ರಸಂ–1ರಲ್ಲಿ ಓದಲಾದ 2015–16ನೇ ಸಾಲಿನ ಆಯವ್ಯಯದಲ್ಲಿ ರೂ. 727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಈ ಕೆಳಕಂಡಂತೆ ಒದಗಿಸಲಾಗಿದೆ. ಲೆಕ್ಕಶೀರ್ಷಿಕೆ 4801-01-190-0-09-211(ಯೋಜನೆ) ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ–ಬಂಡವಾಳ ಹೂಡಿಕೆಗಾಗಿ ರೂ.677.83 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801–01–190–0–09–422 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 36.89 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801–01–190–0–09–423(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಗಿರಿಜನ ಉಪಯೋಜನೆಗಾಗಿ ರೂ.12.30 ಕೋಟಿಗಳನ್ನು ಒದಗಿಸಿದೆ. ಒಟ್ಟಾರೆ ಬಂಡವಾಳ ರೂ. 727.02 ಕೋಟಿಗಳಾಗಿರುತ್ತದೆ.

2) ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09–04–2015ರಲ್ಲಿ ಮೊದಲ ಆರು ತಿಂಗಳಿಗೆ ಶೇ.50ರಷ್ಟನ್ನು ಬಿಡುಗಡೆ ಮಾಡಲು ಇಲಾಖಾ ಮುಖ್ಯಸ್ಥರು ಮತ್ತು ಅಂದಾಜು ಅಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ.

3) ಉಲ್ಲೇಖ–2ರ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ರೂ. 200.00 ಕೋಟಿಗಳ ಬಂಡವಾಳವನ್ನು ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

4) ಮೇಲಿನ ಕ್ರಸಂ–03ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

5) ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ 2015–16ನೇ ಸಾಲಿಗೆ ಲೆಕ್ಕಶೀರ್ಷಿಕೆ 4801–01–190–0–09–211(ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಒದಗಿಸಿರುವ ರೂ. 677.83 ಕೋಟಿಗಳಲ್ಲಿ ಮೊದಲನೇ ತ್ರೈಮಾಸಿಕಕ್ಕೆ ರೂ. 169.00 ಕೋಟಿಗಳ ಈಕ್ವಿಟಿ ಬಂಡವಾಳವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲು ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 20-06-2015.**

2015-16ನೇ ಸಾಲಿಗೆ ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 169.00 ಕೋಟಿಗಳನ್ನು (ರೂ. ನೂರ ಅರವತ್ತೊಂಬತ್ತು ಕೋಟಿಗಳು ಮಾತ್ರ) ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801-01-190-09-0-211 Investment in Power utilities(ಯೋಜನೆ)" ಯಡಿ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿ ಆದೇಶಿಸಿದೆ.

1. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ವಾಗಿ ಬಳಸಿಕೊಂಡು, ಈ ಬಗ್ಗೆ ದೃಢೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
3. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18-06-2015ರಲ್ಲಿ ನೀಡಿದೆ.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09-04-2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**P.R. 470**

## ಇಂಧನ ಸಚಿವಾಲಯ

**ವಿಷಯ** : ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ ವೈಟ್‌ಫೀಲ್ಡ್, ಬೆಂಗಳೂರು ಇವರಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವ ಸಂಬಂಧ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂಖ್ಯೆ: ಡಿಇ 51 ಇಇಬಿ 2001 ದಿನಾಂಕ: 27-04-2001.
2. ಸರ್ಕಾರದ ಆದೇಶ ಸಂಖ್ಯೆ: ಇಎನ್ 60 ಇಇಬಿ 2009 ದಿನಾಂಕ: 31-03-2010.
3. ಬೆಸ್ಕಾಂನ ಇ-ಮೇಲ್ ದಿನಾಂಕ: 16-06-2015
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್2015 ದಿನಾಂಕ: 29-04-2015, 18-05-2015, 01-06-2015(TA) ಮತ್ತು 04-06-2015.

**ಪ್ರಸ್ತಾವನೆ :**

1. ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ, ವೈಟ್ ಫೀಲ್ಡ್, ಬೆಂಗಳೂರು ಇವರಿಗೆ ವಿದ್ಯುತ್ ಬಳಕೆ ಸಂಬಂಧ ಪ್ರತಿ ವರ್ಷ ಗರಿಷ್ಠ ಮೊತ್ತ ರೂ. 2.00 ಕೋಟಿಗಳ ಸಹಾಯಧನವನ್ನು ಲೆಕ್ಕಶೀರ್ಷಿಕೆ 2801-80-1-04-106ರಡಿ ಭರಿಸಲು ಸರ್ಕಾರವು ಮೇಲೆ ಓದಲಾದ ಕ್ರಮಾಂಕ (1) ರ ಆದೇಶದಲ್ಲಿ ಅನುಮೋದನೆ ನೀಡಿದೆ.
2. ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಸರ್ಕಾರವು ಆದೇಶ ಸಂಖ್ಯೆ: ಇಂಇ 51 ಇಇಬಿ 2001 ದಿನಾಂಕ: 27-04-2001ನ್ನು ಭಾಗಶಃ ಮಾರ್ಪಡಿಸಿ ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ಸಂಸ್ಥೆ, ವೈಟ್ ಫೀಲ್ಡ್, ಬೆಂಗಳೂರು ಜೊತೆಗೆ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ಇವರ ವಿದ್ಯುತ್ ಬಳಕೆಗೆ ತಗಲುವ ಮೊತ್ತವನ್ನು ಸಹ ವಾರ್ಷಿಕ ಗರಿಷ್ಠ ರೂ. 2.00 ಕೋಟಿಗಳಿಗೆ (ಎರಡು ಕೋಟಿ ರೂಪಾಯಿಗಳು ಮಾತ್ರ) ಸೀಮಿತಗೊಳಿಸಿ ಸರ್ಕಾರವು ಸಹಾಯಧನವನ್ನು ನೀಡಲು ಅನುಮೋದಿಸಿದೆ.
3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015-16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ-7ರ ಪುಟ ಸಂಖ್ಯೆ-78ರಲ್ಲಿ ಲೆಕ್ಕಶೀರ್ಷಿಕೆ "2801-80-101-1-04-106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ.7,498.00 ಕೋಟಿಗಳನ್ನು ಒದಗಿಸಲಾಗಿದೆ.
4. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 469 ವೆಚ್ಚ-1/2015 ದಿನಾಂಕ: 28-04-2015ರಲ್ಲಿ ಲೆಕ್ಕಶೀರ್ಷಿಕೆ 2801-80-101-1-04-106ರಡಿಯಲ್ಲಿ ಒದಗಿಸಿರುವ ರೂ. 7498.00 ಕೋಟಿಗಳಲ್ಲಿ ರೂ 2.00 ಕೋಟಿಗಳನ್ನು ಸತ್ಯಸಾಯಿ ಸಂಸ್ಥೆಗಳ ವಿದ್ಯುತ್ ಬಳಕೆಯ ವೆಚ್ಚ ಭರಿಸಲು ಸಹಾಯಧನ ನೀಡಲು ಸಹಮತಿಸಿದೆ.
5. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4)ರಲ್ಲಿನ ಸರ್ಕಾರಿ ಆದೇಶದಲ್ಲಿ ಒಟ್ಟು ರೂ. 1,374.67 ಕೋಟಿಗಳನ್ನು ಬಿಡುಗಡೆ ಮಾಡಿದೆ. ಬಾಕಿ ಉಳಿದಿರುವ ರೂ. 6,123.33 ಕೋಟಿಗಳಲ್ಲಿ ರೂ. 2.00 ಕೋಟಿಗಳನ್ನು ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ಸಂಸ್ಥೆ, ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.
6. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ದಿನಾಂಕ: 16-06-2015ರ ಇ-ಮೇಲ್‌ನಲ್ಲಿ ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು, ರವರ ವಿದ್ಯುತ್ ಸ್ಥಾವರ ಸಂಖ್ಯೆ: ಇ4ಹೆಚ್‌ಟಿ-183 ಮತ್ತು ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ ವೈಟ್

ಫೀಲ್ಡ್‌ರವರ ವಿದ್ಯುತ್ ಸ್ಥಾವರ ಸಂಖ್ಯೆ: ಇ4ಹೆಚ್‌ಟಿ–209 ಗಳ ಏಪ್ರಿಲ್–2014ರಿಂದ ಮಾರ್ಚ್–2015ರವರೆಗಿನ ವಿದ್ಯುತ್ ಬಳಕೆ ವೆಚ್ಚ ಭರಿಸಲು ಕ್ರಮವಾಗಿ ರೂ. 2,26,03,182/– ಮತ್ತು 7,73,319/– ಗಳನ್ನು, ಒಟ್ಟಾರೆ ರೂ. 2,33,76,501/–ಗಳಷ್ಟು ಸಹಾಯಧನವನ್ನು ಬಿಡುಗಡೆ ಮಾಡುವಂತೆ ಕೋರಿದೆ.

7. ಸರ್ಕಾರದ ಆದೇಶಗಳು ಹಾಗೂ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಮನವಿಯನ್ನು ಪರಿಗಣಿಸಿ ಸತ್ಯಸಾಯಿ ಸಂಸ್ಥೆಗಳ 2014–15ನೇ ಸಾಲಿನ ವಿದ್ಯುತ್ ಸರಬರಾಜು ವೆಚ್ಚ ಭರಿಸಲು ರೂ. 2.00 ಕೋಟಿಗಳಿಗೆ ಮಿತಿಗೊಳಿಸಿ ಸಹಾಯಧನ ಒದಗಿಸಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ: 22–06–2015.**

1. ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ ವೈಟ್ ಫೀಲ್ಡ್, ಬೆಂಗಳೂರು ಈ ಸಂಸ್ಥೆಗಳ 2014–15ನೇ ಸಾಲಿನ ವಿದ್ಯುತ್ ಬಳಕೆ ವೆಚ್ಚ ಭರಿಸಲು ಗರಿಷ್ಠ ರೂ. 2.00 ಕೋಟಿ (ಎರಡು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನದ ರೂಪದಲ್ಲಿ 2015–16ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ '2801–80–101–1–04–106 (ಯೋಜನೇತರ)ರಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ.
2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಹಣ ಸ್ವೀಕೃತಿ ರಸೀದಿಯ (Payee's Receipts) ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲು ರುಜುವನ್ನು ಪಡೆದು ಹಣ ಪಡೆಯತಕ್ಕದ್ದು ಹಾಗೂ ಈ ಮೊತ್ತವನ್ನು ಸರಿಯಾದ ಲೆಕ್ಕ ತಃಖ್ತೆಯಡಿ ಲೆಕ್ಕೀಕರಿಸುವುದು.
3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 469 ವೆಚ್ಚ–1/2015 ದಿನಾಂಕ: 28–04–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**P.R. 471**

## ಇಂಧನ ಸಚಿವಾಲಯ

**ವಿಷಯ** : 2015–16ನೇ ಸಾಲಿನಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ: 04–09–2008.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ: 17–05–2013.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015 ದಿನಾಂಕ: 29–04–2015, 18–05–2015, 01–06–2015 ಮತ್ತು 04–06–2015.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರ ಸರ್ಕಾರಿ ಆದೇಶದಲ್ಲಿ ನಿಗಧಿಪಡಿಸಿರುವ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊತ್ತವನ್ನು ಸರ್ಕಾರದಿಂದ ಮರುಪಾವತಿ ಮಾಡುವುದಕ್ಕೆ ಅನುಮೋದನೆ ನೀಡಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.
3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ.7197.16 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗದಿಪಡಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ದರ ಆದೇಶ 2013ರಲ್ಲಿ, 2011–12ನೇ ಸಾಲಿಗೆ ರೂ. 443.49 ಕೋಟಿಗಳಷ್ಟು ಹೆಚ್ಚುವರಿ ಸಹಾಯಧನವನ್ನು ಅನುಮೋದಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2014ರ ದರ ಆದೇಶದಲ್ಲಿ 2014–15ನೇ ಸಾಲಿಗೆ ರೂ. 6391.56 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿತ್ತು. ಇದರಲ್ಲಿ ರೂ. 5983.00 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನೂ ರೂ. 408.56 ಕೋಟಿಗಳ ಬಾಕಿ ಸಹಾಯಧನ ಬಿಡುಗಡೆ ಮಾಡಬೇಕಾಗಿದೆ.
4. ಆರ್ಥಿಕ ವರ್ಷ 2015–16ನೇ ಸಾಲಿನ ಆಯವ್ಯಯದಲ್ಲಿ ರೂ. 7498.00 ಕೋಟಿಗಳ ಸಹಾಯಧನವನ್ನು ಒದಗಿಸಿದೆ. ಈವರೆವಿಗೆ ಮೇಲಿನ ಉಲ್ಲೇಖ (3)ರ ಆದೇಶದಲ್ಲಿ ರೂ. 1,374.67 ಕೋಟಿಗಳನ್ನು ಈಗಾಗಲೇ ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲಾಗಿದೆ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿನ ಏಪ್ರಿಲ್–2015 ರಿಂದ ಜೂನ್–2015ರ ವರೆಗೆ ಬಿಡುಗಡೆ ಮಾಡಿರುವ ಸಹಾಯಧನ | 1,200.00 |
| ದಿನಾಂಕ: 13–05–2013ರ ಅಂತ್ಯಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡಸಹಿತ ಬಾಕಿ ಮೊತ್ತದಲ್ಲಿ ಬಿಡುಗಡೆ ಮಾಡಿರುವ ಹಣ. | 26.64 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 16.05 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | 31.98 |
| ತ್ರಿಪಕ್ಷೀಯ ಹೊಂದಾಣಿಕೆ – ಏಪ್ರಿಲ್ 2015ರ ಮಾಹೆಯ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 100.00 |
| **ಒಟ್ಟು 04–06–2015ರವರೆಗೆ ಬಿಡುಗಡೆ ಮಾಡಿದ ಸಹಾಯಧನ** | **1,374.67** |

5. 2015–16ನೇ ಸಾಲಿನ ಏಪ್ರಿಲ್ 2015ರ ಮಾಹೆಗೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಸರಿಹೊಂದಿಸಿರುವ ಮೊತ್ತದ ವಿವರ ಈ ಕೆಳಕಂಡಂತಿದೆ.

**(ರೂ. ಕೋಟಿಗಳಲ್ಲಿ)**

| ವಿಸಕಂ | ಬೆವಿಕಂ | ಮವಿಕಂ | ಹುವಿಕಂ | ಗುವಿಕಂ | ಚಾವಿಸನಿನಿ | ಕವಿನಿನಿ | | ಒಟ್ಟು |
|---|---|---|---|---|---|---|---|---|
| ವಿದ್ಯುತ್ ತೆರಿಗೆ | | | | | | ವಿದ್ಯುತ್ ತೆರಿಗೆ | ರಾಜಧನ | |
| ಏಪ್ರಿಲ್–15 | 63.26 | 8.15 | 8.71 | 6.90 | 8.50 | 0.57 | 3.91 | 100.00 |

6. 2015–16ನೇ ಸಾಲಿನ ಮೇ 2015ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ, ಬಾಕಿ ತೆರಿಗೆ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಮತ್ತು ರಾಜಧನವನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**ರೂ.ಕೋಟಿಗಳಲ್ಲಿ**

| ಕ್ರ. ಸಂ. | ವಿಸಕಂ | ಮೇ–2015 |
|---|---|---|
| 1 | ಬೆವಿಕಂ | 60.47 |
| 2 | ಮವಿಕಂ | 9.06 |
| 3 | ಹುವಿಕಂ | 11.88 |
| 4 | ಗುವಿಕಂ | 8.14 |
| 5 | ಚಾವಿಸನಿನಿ | 6.80 |
| 6 | ಕವಿನಿನಿ | 0.61 |
| | **ಒಟ್ಟು** | **96.96** |
| 7 | ಕವಿನಿನಿ(ರಾಜಧನ) | 3.04 |
| | **ಒಟ್ಟು** | **100.00** |

(ಬೆವಿಕಂ ಹೊಂದಾಣಿಕೆಯ ರೂ. 60.47 ಕೋಟಿಗಳಲ್ಲಿ ಬಾಕಿ ತೆರಿಗೆ ರೂ. 24.72 ಕೋಟಿಗಳು ಒಳಗೊಂಡಿದೆ.)

7. ಮೇಲೆ ವಿವರಿಸಿರುವಂತೆ, ಮೇ–2015ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ, ಬಾಕಿ ತೆರಿಗೆ ಮತ್ತು ರಾಜಧನ ಮೊತ್ತದ ಬಾಬ್ತು ರೂ. 100.00 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 06 ಪಿಎಸ್‌ಆರ್ 2015/ಪಿ4 ಬೆಂಗಳೂರು ದಿನಾಂಕ: 22–06–2015.**

1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಬಾಬ್ತು **ರೂ. 96.35 ಕೋಟಿಗಳನ್ನು (ತೊಂಭತ್ತಾರು ಕೋಟಿ ಮೂವತ್ತೈದು ಲಕ್ಷ ರೂಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A: ESCOM's PORTION** **(Rs. In Crs)**

| DEBIT | | CREDIT | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCoMs** | | **Electricity Tax Collection** | |
| 2801-80-101-1-04-106 | | 0043-00-101-0-01 | |

| | | | |
|---|---|---|---|
| BESCOM | 60.47 | BESCOM | 60.47 |
| MESCOM | 9.06 | MESCOM | 9.06 |
| HESCOM | 11.88 | HESCOM | 11.88 |
| GESCOM | 8.14 | GESCOM | 8.14 |
| CESC | 6.80 | CESC | 6.80 |
| **Total** | **96.35** | **Total** | **96.35** |

ಬೆವಿಕಂ ಹೊಂದಾಣಿಕೆಯ ರೂ. 60.47 ಕೋಟಿಗಳಲ್ಲಿ ಏಪ್ರಿಲ್–2015ರ ಮಾಹೆಯ ಬಾಕಿ ತೆರಿಗೆ ರೂ. 24.72 ಕೋಟಿಗಳು ಒಳಗೊಂಡಿದೆ.

2. 2015–16ನೇ ಸಾಲಿನ ಮೇ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ರೂ. 3.65 ಕೋಟಿಗಳನ್ನು ಸಹ ಸರ್ಕಾರವು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಗುವಿಕಂ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B.KPCL portion** **(Rs. In Crs)**

| **DEBIT** | | **CREDIT** | |
|---|---|---|---|
| **Head of Account** | **Total Amount** | **Head of Account** | **Total Amount** |
| Subsidy to ESCOMs | | Rayalty from KPCL | |
| 2801-80-101-1-04-106 | | 0801-01-201-0-01 | 3.04 |
| GESCOM | 3.65 | | |
| | | **Electricity Tax** | |
| (KPCL to adjust this receipt against power purchase cost of GESCOM) | | 0043-00-101-0-01 | 0.61 |
| **TOTAL – (B)** | **3.65** | **TOTAL – (B)** | **3.65** |

3. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.
4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ ಮತ್ತು ರಾಜಸ್ವ ರೂ. 3.65 ಕೋಟಿಗಳನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.
6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ469 ವೆಚ್ಚ–1/2015 ದಿನಾಂಕ: 28–04–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

P.R. 472

## ಇಂಧನ ಸಚಿವಾಲಯ

**ವಿಷಯ** : 2015–16ನೇ ಸಾಲಿನಲ್ಲಿ ಸರ್ಕಾರವು ವಿದ್ಯುತ್ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1. 2015–16ನೇ ಸಾಲಿನ ಆಯವ್ಯಯ.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18–06–2015.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015 ದಿನಾಂಕ: 20–06–2015.

ಪ್ರಸ್ತಾವನೆ:

1. ಮೇಲಿನ ಕ್ರಸಂ–1ರಲ್ಲಿ ಓದಲಾದ 2015–16ನೇ ಸಾಲಿನ ಆಯವ್ಯಯದಲ್ಲಿ ರೂ. 727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಈ ಕೆಳಕಂಡಂತೆ ಒದಗಿಸಲಾಗಿದೆ. ಲೆಕ್ಕಶೀರ್ಷಿಕೆ 4801–01–190–0–09–211(ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ–ಬಂಡವಾಳ ಹೂಡಿಕೆಗಾಗಿ ರೂ. 677.83 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801–01–190–0–09–422(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 36.89 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801–01–190–0–09–423(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಗಿರಿಜನ ಉಪಯೋಜನೆಗಾಗಿ ರೂ. 12.30 ಕೋಟಿಗಳನ್ನು ಒದಗಿಸಿದೆ. ಒಟ್ಟಾರೆ ಬಂಡವಾಳ ರೂ. 727.02 ಕೋಟಿಗಳಾಗಿರುತ್ತದೆ.
2. ಮೇಲಿನ ಕ್ರಸಂ–2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–**A** ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿದೆ.
3. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಮೇಲಿನ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ರೂ. 727.02 ಕೋಟಿಗಳಲ್ಲಿ ರೂ. 169.00 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ.
4. ದಿನಾಂಕ: 26–05–2015ರಂದು ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ತಿನ ಸಭೆಯಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ (SCSP) ಮತ್ತು ಗಿರಿಜನ ಉಪಯೋಜನೆ (TSP) ಒದಗಿಸಿರುವ ಮೊತ್ತವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿಗಳ ವಿದ್ಯುದ್ಧೀಕರಣಕ್ಕೆ ಮೂಲಸೌಕರ್ಯ ಒದಗಿಸಲು ಪರಿಷತ್ತಿನಲ್ಲಿ ಅನುಮೋದಿಸಿದೆ.
5. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015 ದಿನಾಂಕ: 09–04–2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ 2015–16ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಟ ಜಾತಿ ಮತ್ತು ಗಿರಿಜನ ಉಪಯೋಜನೆಗಳಿಗೆ ಒದಗಿಸಿರುವ ಮೊತ್ತವನ್ನು ಕೆಳಗಿನ ಕೋಷ್ಟಕದಲ್ಲಿರುವಂತೆ ಮೊದಲ ಮೂರು ತಿಂಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ರೂ. ಕೋಟಿಗಳಲ್ಲಿ**

| ಕ್ರ.ಸಂ. | ಲೆಕ್ಕಶೀರ್ಷಿಕೆ | ಮೊತ್ತ |
|---|---|---|
| 1 | 4801–01–190–0–09–422 (SCSP) | 9.22 |
| 2 | 4801–01–190–0–09–423 (TSP) | 3.08 |
| | **ಒಟ್ಟು** | **12.30** |

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 26–06–2015.**

1. 2015–16ನೇ ಸಾಲಿನ ಮೊದಲನೇ ತ್ರೈಮಾಸಿಕ್ಕೆ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಲೆಕ್ಕಶೀರ್ಷಿಕೆ 4801–01–190–0–09–422–SCSP (ಯೋಜನೆ)ಯಡಿ ರೂ. 9.22 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 4801–01–190–0–09–423–TSP (ಯೋಜನೆ)ಯಡಿ ರೂ. 3.08 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳ ವಿದ್ಯುದ್ಧೀಕರಣಕ್ಕೆ ಮೂಲಸೌಕರ್ಯ ಒದಗಿಸಲು ಕೆಳಗಿನ ಕೋಷ್ಟಕದಲ್ಲಿರುವಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| ಕ್ರ.ಸಂ. | ವಿದ್ಯುತ್ ಸರಬರಾಜು ಕಂಪನಿಗಳು | ಲೆಕ್ಕಶೀರ್ಷಿಕೆ | | ಒಟ್ಟು |
|---|---|---|---|---|
| | | **4801–01–190–0–09–422 (SCSP)** | **4801–01–190–0–09–423 (TSP)** | |
| 1 | ಬೆವಿಕಂ | 2.25 | 0.50 | 2.75 |
| 2 | ಮವಿಕಂ | 0.95 | 0.30 | 1.25 |
| 3 | ಹುವಿಕಂ | 1.92 | 0.75 | 2.67 |
| 4 | ಗುವಿಕಂ | 2.60 | 1.03 | 3.63 |
| 5 | ಚಾವಿಸನಿನಿ | 1.50 | 0.50 | 2.00 |
| 6 | ಹುಕ್ಕೇರಿ | 0.00 | 0.00 | 0.00 |
| **ಒಟ್ಟು** | | **9.22** | **3.08** | **12.30** |

2. ಮೇಲಿನ ಕೋಷ್ಟಕದಲ್ಲಿ ಸೂಚಿಸಿರುವ ಮೊತ್ತಕ್ಕೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತರವರು ಪ್ರತಿ ಲೆಕ್ಕಶೀರ್ಷಿಕೆಗೆ ಪ್ರತ್ಯೇಕ ಸ್ವೀಕೃತಿ ರಸೀದಿ (payee's receipts ) ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಪಡೆದು ಹಣವನ್ನು ಪಡೆಯತಕ್ಕದ್ದು.

3. ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಹುಕ್ಕೇರಿ ಗ್ರಾಮೀಣ ಸಹಕಾರಿ ಸಂಘ ರವರು ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ವಾಗಿ ಬಳಸಿಕೊಂಡು, ಈ ಬಗ್ಗೆ ಬಳಕೆಯ ಪ್ರಮಾಣ ಪತ್ರ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದು.
4. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 18-06-2015ರಲ್ಲಿ ನೀಡಿದೆ.
6. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09-04-2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 473**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## COMMERCE AND INDUSTRIES SECRETARIAT

**Sub :** Approval to M/s Jai Bhole Cement Combine Pvt. Ltd., to purchase additional land of 50 acres, additional investment and extension of time to implement the project of "2MMTPA Capacity Slag Base Grinding Unit with 24 MW Thermal Power Plant" at Kudithini Village, Ballari District – Reg.

**Read :**
1. Proceedings of the 24th State High Level Clearance Committee (SHLCC) meeting held on 24-01-2011.
2. Government Order No. CI 55 SPI 2011, dated 23-02-2011.
3. Government Order No. CI 55 SPI 2011, dated 28-12-2012.
4. Proceedings of the 38th State High Level Clearance Committee (SHLCC) meeting held on 17-06-2015.

**PREAMBLE :**

The State High Level Clearance Committee, in its 24th meeting held on 24-01-2011 approved the project proposal of M/s Jai Bhole Cement Combine Pvt. Ltd., to establish "2MMTPA Capacity Slag Base Grinding Unit with 24 MW Thermal Power Plant" with an investment of Rs. 321 crores in 200 acres of land at Ballari. Accordingly Government Order read at (2) above was issued.

Further as per the request of the company, vide Government Order read at (3) above issued that land requirement was reduced to 50 acres at Kudithini Village, Ballari District to be purchased U/s 109 of KLR Act.

Now, the company vide letter dated 08-12-2014 informed that they have purchased 39.11 acres of land at Kudithini Village, Ballari District and process related land survey has started and requested for extension of time.

Further, the company vide their letter uploaded through online on 08-05-2015 informed that, they are planned to expand their project by increasing the investment from Rs. 321 Crores to Rs. 500 Crores and increasing land from 50 acres to 100 acres with additional product of OPC/PPC Cement Grinding and also increase the employment opportunity from 310 to 390 persons and requested to approve the following.

- Purchase of additional land of 50 acres U/s 109 of KLR Act from farmers which are adjacent to already acquired land of 50 acres of land in Kudithini Village.
- Additional investment of Rs. 179 crores in addition to already approved Rs. 321 Crores with OPC/PPC Cement Grinding activity.
- Additional employment of 80 persons in addition to 310 persons.
- Extension of time for earlier approved project by 2 years to implement the project.

In the 38th State High Level Clearance Committee (SHLCC) meeting held on 17-06-2015, the proposal of the Company was discussed and approved.

Government has examined the recommendations made by the State High Level Clearance Committee in the 38th Meeting held on 17-06-2015, in all aspects.

Hence the following order.

**GOVERNMENT ORDER No. CI 55 SPI 2011, BENGALURU, DATED: 10.07.2015**

Government is pleased to approve the following proposals of M/s Jai Bhole Cement Combine Pvt. Ltd., to establish of "2 MMTPA Capacity Slag Base Grinding Unit with 24 MW Thermal Power Plant" at Kudithini Village, Ballari District.

- Additional land of 50 acres U/s 109 of KLR Act which are adjacent to already approved 50 acres of land in Kudithini Village.
- Additional investment of Rs. 179 crores in addition to already approved Rs. 321 Crores with OPC/PPC Cement Grinding activity.
- Additional employment of 80 persons in addition to 310 persons.
- Extension of time for earlier approved project by 2 years from the date of issual of Government Order to implement the project.

All other terms and conditions indicated in the Government Order No. CI 55 SPI 2011, dated 23-02-2011 read at (2) above remain unaltered.

By Order and in the name of the Governor of Karnataka,

**P.R. 485**
**S.C. 25**

**S. UMADEVI,**
Desk Officer (Technical Cell),
Commerce & Industries Department.

## COMMERCE AND INDUSTRIES SECRETARIAT

**Sub :** Approval to M/s XIndia Steels Ltd., to implement the project of "2.5 Million TPA Integrated Steel Plant 250 MW Captive Power Plant" in 3 phases, at Kunikere & Hirebagnal Villages, Koppal Taluk and District – Reg.

**Read :**
1. Proceedings of the 14th State High Level Clearance Committee (SHLCC) meeting held on 17-03-2008.
2. Government Order No. CI 83 SPI 2008, dated 05-05-2008.
3. Proceedings of the 36th State High Level Clearance Committee (SHLCC) meeting held on 15-10-2014.
4. Government Order No. CI 83 SPI 2012, dated 10-12-2014.
5. Proceedings of the 37th State High Level Clearance Committee (SHLCC) meeting held on 27-03-2015.
6. Government Order No. CI 83 SPI 2008, dated 20-05-2015.
7. Proceedings of the 38th State High Level Clearance Committee (SHLCC) meeting held on 17-06-2015.

**PREAMBLE :**

In the 14th SHLCC meeting held on 17-03-2008 read at (1) above approved the proposal of M/s XIndia Steels Ltd., to establish a "2.5 Million TPA Integrated Steel Plant with 250 MW Captive Power Plant" with an investment of Rs. 8735 Crores, in 1201 acres 15 guntas of land U/s 109 of KLR Act at various Sy. Nos of Kunikere & Hirebagnal Villages, Koppal Taluk and District. Accordingly, Government Order read at (2) above was issued.

Further in the 36th SHLCC meeting held on 15-10-2014 read at (3) above, the committee granted 3 years of extension of time to implement the project and Government Order read at (4) above was issued and in accordance with the approval of 37th SHLCC meeting held on 27-03-2015 read at (5) above, purpose with an additional investment of Rs. 35.30 Cr. Vide Government Order read at (6) above.

Now, the company vide letter dated 30-04-2015 has informed that, they have established I Phase i.e. 0.8 MTPA Pellet Plant which is operational from July, 2011. They have applied for 2nd Phase Environmental Clearance with Ministry of Environment, Forest, GoI in the year 2010 and same has been sanctioned on 04-02-2015. The delay in EC is due to iron ore mining ban in the State of Karnataka by Hon'ble Supreme Court and MOEF not considered any projects where iron ore as raw material.

Therefore, they are requesting for to amend the Government Order mentioning phase wise implementation of the approved project as they could not implement the mega project in a single phase as follows :

| | |
|---|---|
| Total land Required : | 1431 Acres (1201+230 – SHLCC approvals are in place) |
| Total Investment : | Rs. 8735 crores |
| I Phase - | 0.8 MTPA Pellet Plant |
| Land Required : | 200 Acres |
| Investment : | Rs. 252 crores |
| II Phase - | 1.2 MTPA Integrated Steel Plant & 160 MW Power Plant |

(Delayed obtaining ENVIRONMENT CLEARANCE from MOEF due to mining ban in the State of Karnataka though it is applied in 2010. EC accorded by Ministry of Environment, Forest & Climate Change, Govt. of India by 04th February, 2015 and Project discussions in progress).

Land required : 800 Acres

Investment : Rs. 6,161 crores

III Phase – expansion of the above to 2.5 MTPA steel Plant and 250 MW Power Plant

Land Required : 431 Acres

Investment : Rs. 2,322 crores

In the 38th State High Level Clearance Committee (SHLCC) Meeting held on 17-06-2015, the proposal of the Company was discussed and approved.

Government has examined the recommendations made by the State High Level Clearance Committee in the 38th Meeting held on 17-06-2015, in all aspects.

Hence the following order.

**GOVERNMENT ORDER No. CI 83 SPI 2012, BENGALURU, DATED: 10.07.2015**

Government is pleased to permit the company “2.5 Million TPA Integrated Steel Plant 250 MW Captive Power Plant” in 3 phases, at Kunikere & Hirebagnal Villages, Koppal Taluk and District.

All other terms and conditions indicated in the Government Orders No. CI 83 SPI 2008, dated 05-05-2008 and No. CI 83 SPI 2012, dated 10-12-2014 read at (2) & (4) above, remain unaltered.

By Order and in the name of the Governor of Karnataka,

**S. UMADEVI,**
Desk Officer (Technical Cell),
Commerce & Industries Department.

**P.R. 486**
**S.C. 25**

## COMMERCE AND INDUSTRIES SECRETARIAT

**Sub :** Project Proposal of M/s. Kinetix Solutions Pvt. Ltd., to establish “Trailer Wagon Mounted Mobile Launcher & Control Electronics” at Devanahalli, Bengaluru Rural District – Reg.

**Read :**
1. Proceedings of the 37th State High Level Clearance Committee (SHLCC) meeting held on 27-03-2015.
2. Government Order No. CI 132 SPI 2015, dated 06-05-2015.
3. Proceedings of the 38th State High Level Clearance Committee (SHLCC) meeting held on 17-06-2015.

**PREAMBLE :**

In the 37th SHLCC meeting held on 27-03-2015 read at (1) above the Government approved the project proposal of M/s. Kinetix Solutions Pvt. Ltd., to establish “Trailer Wagon Mounted Mobile Static Launcher & Control Electronics” in 10 acres of land at Aerospace Park, Devanahalli, Bengaluru Rural District. Accordingly, Government Order read at (2) above was issued.

Now the Company has requested to make necessary correction in the approval in name of the Industrial Area as “Aerospace SEZ, Devanahalli” instead of “Aerospace Park, Devanahalli” in the Government Order issued.

In the 38th State High Level Clearance Committee (SHLCC) meeting held on 17-06-2015, the proposal of the Company was discussed and approved.

Government has examined the recommendations made by the State High Level Clearance Committee in the 38th Meeting held on 17-06-2015, in all aspects.

Hence the following order.

**GOVERNMENT ORDER No. CI 132 SPI 2015, BENGALURU, DATED: 10.07.2015**

Government is pleased to make correction in name of the Industrial Area as "Aerospace SEZ, Devanahalli" instead of "Aerospace Park, Devanahalli" in the Government Order No. CI 132 SPI 2015, dated 06-05-2015 read at (2) above.

All other terms and conditions indicated in the Government Order No. CI 132 SPI 2015, dated 06-05-2015 (2) above, remain unaltered.

By Order and in the name of the Governor of Karnataka,

**P.R. 487**

**S.C. 25**

**S. UMADEVI,**

Desk Officer (Technical Cell),

Commerce & Industries Department.

## COMMERCE AND INDUSTRIES SECRETARIAT

**Sub :** Extension of time to M/s. Mphinite Solutions Pvt. Ltd., to implement the project of "Manufacturing of Pet Bottles, Jars and Preforms" at Yadgir Industrial Area, Yadgir District – Reg.

**Read :**

1. Proceedings of the 27th State High Level Clearance Committee (SHLCC) meeting held on 13-04-2012.
2. Government Order No. CI 134 SPI 2012, dated 21-04-2012.
3. Proceedings of the 38th State High Level Clearance Committee (SHLCC) meeting held on 17-06-2015.

**PREAMBLE :**

The project proposal of M/s. Mphinite Solutions Pvt. Ltd., to establish "Pet Bottles, Jars and Preforms" with an investment of Rs. 489.11 Crores in 125 acres of land at Yadgir Industrial Area, Yadgir was approved in 27th SHLCC meeting held on 13-04-2012 read at (1) above. Accordingly, Government Order was issued read at (2) above.

The company vide its letter dated 16-04-2015 has informed that the delay in implementation of the project is due to the fact that the allotted land was under litigation and hence, they could not take possession of such land during the stipulated time. Now, the Additional Bench of Kalaburagi High Court has cleared the litigation. Hence, they want to take up possession of land and implement the project at the earliest.

The area is hugely under developed and they would like to set up the basic infrastructure and accommodation for construction staff and workers. The area allotted being 125 acres needs to be fenced and leveled before any actual construction work can commence. The company has informed that all the above mentioned activities will take approximately 18-24 months to complete.

In view of the above, the company is requesting for extension of time for period of two years for implementation of the project.

In the 38th State High Level Clearance Committee (SHLCC) meeting held on 17-06-2015, the proposal of the Company was discussed and approved.

Government has examined the recommendations made by the State High Level Clearance Committee in the 38th Meeting held on 17-06-2015, in all aspects.

Hence the following order.

**GOVERNMENT ORDER No. CI 134 SPI 2012, BENGALURU, DATED: 10.07.2015**

Government is pleased to grant extension of time to M/s. Mphinite Solutions Pvt. Ltd., to implement the project approved vide Government Order CI 134 SPI 2012, dated, 21-04-2012 for further period of two years from the date of issue of this order.

All other terms and conditions indicated in the Government Order No. CI 134 SPI 2012, dated 21-04-2012 read at (2) above, remain unaltered.

By Order and in the name of the Governor of Karnataka,

**P.R. 488**

**S.C. 25**

**S. UMADEVI,**

Desk Officer (Technical Cell),

Commerce & Industries Department.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಒಳಾಡಳಿತ ಸಚಿವಾಲಯ**

**ವಿಷಯ:** 2014ನೇ ಸಾಲಿನಲ್ಲಿ ಕಾರಾಗೃಹ ಇಲಾಖೆಯ ಅಧಿಕಾರಿ / ನೌಕರರಿಗೆ ಮಾನ್ಯ ಮುಖ್ಯಮಂತ್ರಿಯವರ ಪದಕ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 61 ಪಿಆರ್‌ಇ 2011, ದಿನಾಂಕ: 14.8.2013.

2. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರ ಇತ್ತೀಚಿನ ಪತ್ರ ಸಂಖ್ಯೆ:ಇಎಸ್‌ಟಿ1/ಸಿಆರ್–141/2014–15, ದಿನಾಂಕ: 30.6.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಕಾರಾಗೃಹ ಇಲಾಖೆಯ ಅಧಿಕಾರಿ / ಸಿಬ್ಬಂದಿಗಳಿಗೆ ಮಾನ್ಯ ಮುಖ್ಯಮಂತ್ರಿಯವರ ಪದಕ ನೀಡುವಂತೆ ನಿಯಮಾವಳಿಗಳನ್ನು ರಚಿಸಲಾಗಿದೆ. ಸದರಿ ಆದೇಶದಲ್ಲಿ ಇಲಾಖೆಯ ಅಧಿಕಾರಿ / ನೌಕರರ ಅಸಾಧಾರಣ ಸೇವೆ / ರಾಷ್ಟ್ರೀಯ–ರಾಜ್ಯ ಕ್ರೀಡಾ ವಿಶೇಷತೆ ಮತ್ತು ಇತರೆ ಅಸಾಧಾರಣ ಸೇವೆಗಳನ್ನು ಪರಿಗಣಿಸಿ ಇಲಾಖಾ ಮಟ್ಟದಲ್ಲಿ ಸಭೆ ಜರುಗಿಸಿ ಶಿಫಾರಸ್ಸನ್ನು / ಪ್ರಸ್ತಾವನೆಯನ್ನು ಸಲ್ಲಿಸಲು ತಿಳಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರು ಒಟ್ಟು 11 ಅಧಿಕಾರಿ / ನೌಕರರ ಪ್ರಸ್ತಾವನೆಗಳನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 166 ಪಿಆರ್‌ಇ 2014, ಬೆಂಗಳೂರು, ದಿನಾಂಕ: 19.10.2015.**

2014ನೇ ಸಾಲಿನಲ್ಲಿ ಕಾರಾಗೃಹ ಇಲಾಖೆಯ ಈ ಕೆಳಕಂಡ ಅಧಿಕಾರಿ / ನೌಕರರಿಗೆ ಮಾನ್ಯ ಮುಖ್ಯಮಂತ್ರಿಯವರ ಪದಕ ನೀಡಲು ಅನುಮೋದಿಸಿದೆ:–

1. ಶ್ರೀ ಎಸ್.ಸಿ. ಪ್ರಭಾಕರ್ ಮೂರ್ತಿ, ಸಹಾಯಕ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು.
2. ಡಾ ಮಲ್ಲಿಕಾರ್ಜುನ ಬಿ, ಸಹಾಯಕ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬಳ್ಳಾರಿ.
3. ಶ್ರೀ ಬಿ.ಎಸ್. ನಟರಾಜ್, ಸಹಾಯಕ ಅಧೀಕ್ಷಕರು, ಕೇಂದ್ರ ಕಾರಾಗೃಹ, ಮೈಸೂರು.
4. ಶ್ರೀ ಎಂ.ಆರ್. ಸತೀಶ್, ಸಹಾಯಕ ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಮಂಡ್ಯ.
5. ಶ್ರೀ ಲಿಂಗರಾಜು ಎಂ. ಕಡಕೊಳ, ಮುಖ್ಯ ವೀಕ್ಷಕರು, ಕೇಂದ್ರ ಕಾರಾಗೃಹ, ಮೈಸೂರು.
6. ಶ್ರೀ ಎಂ.ಎಸ್. ಹೊಸೂರ, ಮುಖ್ಯ ವೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು.

ಮಾನ್ಯ ಮುಖ್ಯಮಂತ್ರಿಯವರ ಪದಕಗಳ ವಿನ್ಯಾಸ ಮತ್ತಿತರೆ ಶಿಷ್ಟಾಚಾರ ಕ್ರಮಗಳನ್ನು ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 61 ಪಿಆರ್‌ಇ 2011, ದಿನಾಂಕ: 14.8.2013ರಲ್ಲಿರುವಂತೆ ಪಾಲಿಸತಕ್ಕದ್ದು.

ಕಾರಾಗೃಹ ಇಲಾಖೆಯ ಅಧಿಕಾರಿ / ಸಿಬ್ಬಂದಿಗಳಿಗೆ ನೀಡಲಾಗುವ ಮಾನ್ಯ ಮುಖ್ಯಮಂತ್ರಿಯವರ ಪದಕಗಳ ವಿತರಣಾ ಪ್ರಕಾರ್ಯವನ್ನು ಪೊಲೀಸ್ ಇಲಾಖೆಯ "ಪದಕ ವಿತರಣಾ ಸಮಾರಂಭ" ದೊಂದಿಗೆ ಆಯೋಜಿಸಲು ಕ್ರಮಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎಸ್.ಜೋಗೋಜಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಸೆರಮನೆ ಮತ್ತು ಸಿನಿಮಾ).

**PR. 602**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59